# ಕರ್ನಾಟಕ ವಿಧಾನ ಪರಿಷತ್ತು

1 ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 769

2 ಸದಸ್ಯರ ಹೆಸರು : ಶ್ರೀ ಸುನೀಲ್ ಸುಬ್ರಮಣಿ ಎಂ.ಪಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

3 ಉತ್ತರಿಸುವ ಸಚಿವರು : ಮಾನ್ಯ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು

4 ಉತ್ತರಿಸಬೇಕಾದ ದಿನಾಂಕ : 05.03.2021

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕಿತ್ತಳೆ ಬೆಳೆಯನ್ನು ಬೆಳೆಯುತ್ತಿರುವ ಜಿಲ್ಲೆಗಳು ಯಾವುವು; ಮತ್ತು ಅಲ್ಲಿನ ಕಿತ್ತಳೆ ಬೆಳೆಯ ವಿಸ್ತೀರ್ಣದ ವಿವರಗಳನ್ನು ಒಳಗೊಂಡಂತೆ ತಾಲ್ಲೂಕು ವಾರು ವಿವರ ನೀಡುವುದು; | ರಾಜ್ಯದಲ್ಲಿ ಕಿತ್ತಳೆ ಬೆಳೆಯನ್ನು ಪ್ರಮುಖವಾಗಿ ಕೊಡಗು , ಹಾಸನ ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಬೆಳೆಯಲಾಗುತ್ತಿದೆ. ಕಿತ್ತಳೆ ಬೆಳೆಯ ವಿಸ್ತೀರ್ಣದ ವಿವರಗಳನ್ನು ಒಳಗೊಂಡಂತೆ ತಾಲ್ಲೂಕುವಾರು ವಿವರ ಈ ಕೆಳಕಂಡಂತಿದೆ.<br><br>Orange is grown mainly in Kodagu, Hassan and Chikmagalur districts of the state. The taluk-wise details of area are as follows: |

| ಕ್ರ. ಸಂ | ಜಿಲ್ಲೆ/ತಾಲ್ಲೂಕು District/Taluk | Area in Hectares ವಿಸ್ತೀರ್ಣ ಹೆಕ್ಟೇರ್ ಗಳಲ್ಲಿ |
|---|---|---|
| | ಕೊಡಗು Kodagu | |
| 1 | ಮಡಿಕೇರಿ Madikeri | 1692.20 |
| 2 | ಸೋಮವಾರಪೇಟೆ Somavarapet | 872.15 |
| 3 | ವಿರಾಜಪೇಟೆ Virajpet | 666.61 |
| | ಒಟ್ಟು Total | 3230.96 |
| | ಹಾಸನ Hassan | |
| 1 | ಆಲೂರು Alur | 15.00 |
| 2 | ಅರಕಲಗೂಡು Arakalagud | 40.00 |
| 3 | ಬೇಲೂರು Belur | 267.00 |
| 4 | ಸಕಲೇಶಪುರ Sakaleshpur | 480.00 |
| | ಒಟ್ಟು Total | 802.00 |
| | ಚಿಕ್ಕಮಗಳೂರು Chikkamagalur | |
| 1 | ಚಿಕ್ಕಮಗಳೂರು Chikkamagalur | 267.28 |
| 2 | ಕೊಪ್ಪ Koppa | 32.7 |
| 3 | ಮೂಡಿಗೆರೆ Mudigere | 6.3 |
| | ಒಟ್ಟು Total | 306.28 |
| | ಒಟ್ಟಾರೆ Grand Total | 4339.24 |

| | | |
|---|---|---|
| ಆ) | ರಾಜ್ಯದಲ್ಲಿ ಕಿತ್ತಳೆ ಬೆಳೆಯ ಪುನಃಶ್ಚೇತನಕ್ಕೆ ಸರ್ಕಾರ ಕೈಗೊಂಡ ಕ್ರಮಗಳೇನು; ಈ ಪರಿಹಾರ ಕ್ರಮಗಳಿಂದ ಆದ ಪರಿಣಾಮಗಳೇನು: (ವಿವರ ನೀಡುವುದು) | ರಾಜ್ಯದಲ್ಲಿ ಕಿತ್ತಳೆ ಬೆಳೆಯ ಪುನಶ್ಚೇತನಕ್ಕೆ ಸರ್ಕಾರವು ಈ ಕೆಳಕಂಡಂತೆ ಕ್ರಮ ಕೈಗೊಂಡಿದೆ.<br>• ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ ಕಿತ್ತಳೆ ಹಳೆ ತೋಟಗಳ ಪುನಃಶ್ಚೇತನಕ್ಕಾಗಿ ಪ್ರತಿ ಹೆಕ್ಟೇರ್ ಗೆ ಶೇ. 50 ರಂತೆ ರೂ.20,000/- ಗರಿಷ್ಟ 2 ಹೆಕ್ಟೇರ್ ವರೆಗೆ ಸಹಾಯಧನ ನೀಡಲಾಗುತ್ತಿದೆ.<br>• ಸದರಿ ಯೋಜನೆಯಡಿ ರೋಗಗ್ರಸ್ತ ಹಾಗೂ ಅನುಪಯುಕ್ತ ಗಿಡಗಳನ್ನು ತೆಗೆದು ಹೊಸ ಗಿಡಗಳನ್ನು ನಾಟಿ ಮಾಡುವುದಲ್ಲದೇ ಮಣ್ಣಿನ ಫಲವತ್ತತೆ ಹೆಚ್ಚಿಸುವುದು ಮತ್ತು ಕೀಟ ರೋಗಗಳ ನಿಯಂತ್ರಣದ ಮುಖಾಂತರ ಕಿತ್ತಳೆ ಬೆಳೆಯನ್ನು ಪುನಃಶ್ಚೇತನಗೊಳಿಸಲಾಗುತ್ತಿದೆ.<br>• 2017-18 ರಿಂದ 2020-21 ರವರೆಗೆ ಒಟ್ಟು 586.83 ಹೆಕ್ಟೇರ್ ವಿಸ್ತೀರ್ಣ ಕಿತ್ತಳೆ ತಾಕುಗಳನ್ನು ಪುನಶ್ಚೇತನಗೊಳಿಸಿ ಶೇ.50 ರಂತೆ ರೂ.68.093 ಲಕ್ಷಗಳ ಸಹಾಯಧನ ನೀಡಿ, 1211 ಜನ ರೈತರಿಗೆ ನೆರವು ನೀಡಲಾಗಿದೆ.<br>• ಇದರ ಪರಿಣಾಮವಾಗಿ ಮಣ್ಣಿನ ಫಲವತ್ತತೆ ಸುಧಾರಿಸಿದ್ದು, ಹಾಗೂ ಸಮಗ್ರ ಕೀಟ/ ರೋಗಗಳ ನಿಯಂತ್ರಣದಿಂದಾಗಿ ಕಿತ್ತಳೆ ಬೆಳೆಯಲ್ಲಿ ಹೆಚ್ಚಿನ ಇಳುವರಿ ಪಡೆಯಲು ಸಾಧ್ಯವಾಗಿರುತ್ತದೆ.<br><br>Following steps have been taken by the Government to rejuvenate the orange crop in the state.<br>• Under National Horticulture Mission scheme for the programme of rejuvenation each beneficiary is given a subsidy of Rs.20,000/- (50% of unit cost) per hectare, upto maximum of 2 hectare.<br>• In this programme Orange crop rejuvenation is done by planting new plants by removing senile and unproductive trees, by improving the soil health, fertility and controlling pest and disease.<br>• From 2017-18 to 2020-21, 586.83 Ha. Orange orchards have been rejuvenated by giving 50% subsidy amounting to Rs.68.03 lakhs covering 1211 beneficiaries.<br>• As result of these remedies in Orange crop have improved soil fertility and comprehensive pest control has resulted in increase in yield. |

| | | |
|---|---|---|
| ಇ) | ಕೊಡಗು ಜಿಲ್ಲೆಯಲ್ಲಿ ಕೊಡಗಿನ ಕಿತ್ತಳೆಯನ್ನು ಉಳಿಸಲು ಮತ್ತು ಬೆಳೆಸಲು ಸರ್ಕಾರ ನೀಡುವ ಪ್ರೋತ್ಸಾಹದಾಯಕ ಕ್ರಮಗಳೇನು? (ವಿವರ ನೀಡುವುದು) | ಕೊಡಗು ಜಿಲ್ಲೆಯ ಕೊಡಗಿನ ಕಿತ್ತಳೆಯನ್ನು ಉಳಿಸಲು ಮತ್ತು ಬೆಳೆಸಲು ಈ ಕೆಳಕಂಡ ಪ್ರೋತ್ಸಾಹದಾಯಕ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗಿದೆ.<br>• ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯ ಕಿತ್ತಳೆ ಹಳೆ ತೋಟಗಳ ಪುನಃಶ್ಚೇತನ ಕಾರ್ಯಕ್ರಮದಡಿ ಕೊಡಗು ಜಿಲ್ಲೆಯಲ್ಲಿ ಪ್ರತಿ ಹೆಕ್ಟೇರ್ ಗೆ ಶೇ. 50 ರಂತೆ ರೂ.20,000/- ಗರಿಷ್ಟ 2 ಹೆಕ್ಟೇರ್ ವರೆಗೆ ಸಹಾಯಧನ ನೀಡಲಾಗುತ್ತಿದೆ.<br>• ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯ ಕಿತ್ತಳೆ ಪ್ರದೇಶ ವಿಸ್ತರಣೆ ಕಾರ್ಯಕ್ರಮದಡಿ ಪ್ರತಿ ಹೆಕ್ಟೇರ್ ಗೆ ಶೇ. 50 ರಂತೆ ರೂ.10,000/- ಸಹಾಯಧನ ನೀಡಲಾಗುತ್ತಿದೆ.<br>• ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯ ಕೀಟ ಮತ್ತು ರೋಗಗಳ ನಿಯಂತ್ರಣ ಕಾರ್ಯಕ್ರಮದಡಿ ಕೀಟ ಮತ್ತು ರೋಗಗಳ ನಿಯಂತ್ರಣಕ್ಕಾಗಿ 1 ಹೆಕ್ಟೇರ್ ಗೆ ರೂ.1200/- ರಂತೆ ಗರಿಷ್ಟ 4 ಹೆಕ್ಟೇರ್ ವರೆಗೆ ಸಹಾಯಧನವನ್ನು ನೀಡಲಾಗುತ್ತಿದೆ.<br>• ರಾಜ್ಯ ವಲಯ ಯೋಜನೆಯಡಿ ಕಿತ್ತಳೆ ಸೇರಿದಂತೆ ಇತರೆ ತೋಟಗಾರಿಕೆ ಬೆಳೆಗಳ ಕೀಟ ಹಾಗೂ ರೋಗ ನಿಯಂತ್ರಣಕ್ಕಾಗಿ ಸಾಮಾನ್ಯ ವರ್ಗದ ರೈತರಿಗೆ ಪ್ರತಿ ಹೆಕ್ಟೇರ್ ಗೆ ರೂ.7,500/- ಮತ್ತು ಪರಿಶಿಷ್ಟ ಜಾತಿ ಮತ್ತು ಪಂಗಡದ ರೈತರಿಗೆ ಪ್ರತಿ ಹೆಕ್ಟೇರ್ ಗೆ ರೂ.9,000/- ದಂತೆ ಸಹಾಯಧನವನ್ನು ವಿತರಿಸಲಾಗುತ್ತಿದೆ.<br>• ಮಹಾತ್ಮ ಗಾಂಧಿ ಉದ್ಯೋಗ ಖಾತ್ರಿ ಯೋಜನೆಯಡಿ ಕಿತ್ತಳೆ ಜಾತಿಯ ಬೆಳೆಗಳ ಪ್ರದೇಶ ವಿಸ್ತರಣೆಯನ್ನು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಸಣ್ಣ ಮತ್ತು ಅತಿ ಸಣ್ಣ ರೈತರ ತೋಟಗಳಲ್ಲಿ ಕೈಗೊಳ್ಳಲು ಪ್ರತಿ ಹೆಕ್ಟೇರ್ ಗೆ ಕೂಲಿ ವೆಚ್ಚ ರೂ.49604/- ಹಾಗೂ ಸಾಮಾಗ್ರಿ ವೆಚ್ಚ ರೂ.26181/- ನೀಡಲಾಗುತ್ತಿದೆ.<br><br>The following incentive programmes have been undertaken to save and cultivate orange in Kodagu district.<br>• Under National Horticulture Mission scheme, for Area Expansion Programme, 50% subsidy of Rs.10,000/- per Ha. is given.<br>• Under National Horticulture Mission scheme, in Rejuvenation Programme 50% subsidy of Rs.20,000/- per Ha. is given to remove and rejuvenate existing plants<br>• Under National Horticulture Mission scheme, in |

| | | | |
|---|---|---|---|
| | | | integrated pest and disease management programme, a subsidy of Rs.1200/- per Ha. (Maximum of 4 Ha.) is given for the control of pest and diseases.<br>• Under State Sector Scheme, to control the Pest and Diseases a subsidy of Rs.7,500/- per Ha. for General farmers and Rs.9,000/- per Ha. for Scheduled Castes and Scheduled Tribe farmers is given to horticultural crops including Orange.<br>• Under MGNREGA scheme, for the area expansion of orange group fruit crops, labour cost of Rs.49604/- and material cost of Rs. 26181/- is given per hectare for SC, ST, small and marginal farmers. |

Horti 92 HGM 2021

(ಆರ್.ಶಂಕರ್)
ತೋಟಗಾರಿಕೆ ಮತ್ತು ರೇಷ್ಮೆ ಸಚಿವರು